## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1022 |
| 2 | ಸದಸ್ಯರ ಹೆಸರು | : | ಶ್ರೀ ಕವಟಗಿ ಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 12-03-2020 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th colspan="3">ಉತ್ತರ</th></tr>
<tr><td>ಅ)</td><td>ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ನಿರ್ವಹಿಸಲಾಗುತ್ತಿರುವ ಮೇಲ್ಸೇತುವೆಗಳ ಸಂಖ್ಯೆ ಎಷ್ಟು;</td><td colspan="3">ಬಿಬಿಎಂಪಿ ವ್ಯಾಪ್ತಿಯಲ್ಲಿ ಈ ಕೆಳಕಂಡ 04 ಮೇಲುಸೇತುವೆಗಳ ನಿರ್ಮಾಣ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ.<br><br>1 ಈಜಿಪುರ ಮೇಲುಸೇತುವೆ ಕಾಮಗಾರಿ.<br>2.ರಾಜಾಜಿನಗರ ಕಾರ್ಡ್ ರಸ್ತೆಯಲ್ಲಿ ಬಸವೇಶ್ವರನಗರ ಮುಖ್ಯರಸ್ತೆ ಮಂಜುನಾಥನಗರ ಮುಖ್ಯರಸ್ತೆ ಮತ್ತು ಶಿವನಗರ ಮುಖ್ಯ ರಸ್ತೆಗಳ ಕೂಡು ಸ್ಥಳಗಳಲ್ಲಿ ಮೇಲು ಸೇತುವೆ ಕಾಮಗಾರಿ.<br>3. ಓಕಳೀಪುರಂ 8 ಪಥದ ಮೇಲುಸೇತುವೆ ಕಾಮಗಾರಿ.<br>4. ಶಿವಾನಂದ ಮೇಲುಸೇತುವೆ ಕಾಮಗಾರಿ.<br>ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಹೊರವರ್ತುಲ ರಸ್ತೆಯಲ್ಲಿ ಎರಡು ಮೇಲುಸೇತುವೆಗಳನ್ನು ನಿರ್ಮಿಸಲಾಗುತ್ತಿದೆ.<br>1. ಹೆಬ್ಬಾಳ ಜಂಕ್ಷನ್ ಮೇಲುಸೇತುವೆ ಕಾಮಗಾರಿಯನ್ನು ಪೂರ್ಣಗೊಳಿಸಬೇಕಾದ ಅವಧಿ 24 ತಿಂಗಳು.<br>2. ಶ್ರೀ ಕಂಠೀರವ ಸ್ಟುಡಿಯೋ ಜಂಕ್ಷನ್ ಗ್ರೇಡ್ ಸೆಪರೇಟರ್ ಕಾಮಗಾರಿಯನ್ನು ದಿನಾಂಕ: 02-05-2012 ರಂದು ಪ್ರಾರಂಭಿಸಿದ್ದು, ದಿನಾಂಕ: 31-12-2015 ಮುಕ್ತಾಯ ದಿನಾಂಕವಾಗಿರುತ್ತದೆ.</td></tr>
<tr><td rowspan="3">ಆ)</td><td rowspan="3">ಈ ಮೇಲ್ಸೇತುವೆಗಳನ್ನು ಯಾವ ಯಾವ ಕಾಲಮಿತಿಯಲ್ಲಿ ಪೂರ್ಣಗೊಳ್ಳಲು ಒಪ್ಪಂದ ಮಾಡಿಕೊಳ್ಳಲಾಗಿದೆ; (ಪ್ರತಿಯೊಂದರ ಮಾಹಿತಿ ನೀಡುವುದು)</td><td colspan="3">ಈ ಕೆಳಕಂಡಂತೆ ಮೇಲು ಸೇತುವೆಗಳನ್ನು ಪ್ರಸ್ತಾಪಿಸುವ ಕಾಲಮಿತಿಯಲ್ಲಿ ಪೂರ್ಣಗೊಳಿಸಲು ಒಪ್ಪಂದ ಮಾಡಿಕೊಳ್ಳಲಾಗುತ್ತಿದೆ.</td></tr>
<tr><td>1</td><td>ಈಜಿಪುರ ಮೇಲುಸೇತುವೆ ಕಾಮಗಾರಿ.</td><td>ಗುತ್ತಿಗೆ ಕರಾರಿನಂತೆ ಮೇಲುಸೇತುವೆ ಕಾಮಗಾರಿಯನ್ನು ದಿನಾಂಕ:04.11.2019 ರಂದು ಪೂರ್ಣಗೊಳಿಸಬೇಕಾಗಿದ್ದು, ಹಲವು ತಾಂತ್ರಿಕ ಕಾರಣಗಳಿಂದ ಯೋಜನೆಯ ಕಾಲಾವಧಿಯನ್ನು ದಿನಾಂಕ: 31.12.2020 ರವರೆಗೆ ವಿಸ್ತರಿಸಲಾಗಿರುತ್ತದೆ.</td></tr>
<tr><td>2</td><td>ರಾಜಾಜಿನಗರ ಕಾರ್ಡ್ ರಸ್ತೆಯಲ್ಲಿ ಬಸವೇಶ್ವರನಗರ ಮುಖ್ಯ ರಸ್ತೆ ಮಂಜುನಾಥನಗರ ಮುಖ್ಯರಸ್ತೆ ಮತ್ತು ಶಿವನಗರ ಮುಖ್ಯ ರಸ್ತೆಗಳ</td><td>ಮಂಜುನಾಥ ನಗರ ಮುಖ್ಯ ರಸ್ತೆ ಕೂಡು ಸ್ಥಳದಲ್ಲಿ ಮೇಲುಸೇತುವೆಯನ್ನು ಪೂರ್ಣಗೊಳಿಸ ಲಾಗಿದ್ದು, ಬಸವೇಶ್ವರನಗರ ಮತ್ತು ಶಿವನಗರ ಮೇಲುಸೇತುವೆಗಳು ಪ್ರಗತಿಯಲ್ಲಿರುತ್ತವೆ. ಈ ಯೋಜನೆಯನ್ನು ಪೂರ್ಣಗೊಳಿಸಲು ಅಕ್ಟೋಬರ್-2019 ರವರೆಗೆ ಕಾಲಮಿತಿಯನ್ನು ನಿಗಧಿಪಡಿಸಲಾಗಿತ್ತು, ಆದರೆ</td></tr>
</table>

| | | |
|---|---|---|
| | ಕೂಡು ಸ್ಥಳಗಳಲ್ಲಿ ಮೇಲು ಸೇತುವೆ ಕಾಮಗಾರಿ. | ಸ್ಥಳದಲ್ಲಿನ ತಾಂತ್ರಿಕ ಕಾರಣಗಳಿಂದಾಗಿ ಯೋಜನೆಯ ಕಾಲಾವಧಿ ಯನ್ನು ಏಪ್ರಿಲ್-2020ರ ವರೆಗೆ ವಿಸ್ತರಿಸಲಾಗಿರುತ್ತದೆ. |
| 3 | ಓಕಳೀಪುರಂ 8 ಪಥದ ಮೇಲು ಸೇತುವೆ ಕಾಮಗಾರಿ. | ಓಕಳೀಪುರಂ 8 ಪಥದ ಮೇಲುಸೇತುವೆ ಕಡೆಯ ಲೂಪ್ ಅಂದರೆ ಮಲ್ಲೇಶರಂನಿಂದ ರೈಲ್ವೆ ನಿಲ್ದಾಣದ ಕಡೆಗೆ ಹೋಗುವ Down Ramp ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. ಈ ಯೋಜನೆಯನ್ನು ಪೂರ್ಣಗೊಳಿಸಲು 31-12-2019 ರವರೆಗೆ ಕಾಲಮಿತಿಯನ್ನು ನಿಗಧಿಪಡಿಸಲಾಗಿತ್ತು, ಯೋಜನೆಯ ನಿರ್ವಹಣೆಯ ಸ್ಥಳದಲ್ಲಿನ ರೈಲ್ವೆ ಅಂಡರ್‌ಪಾಸ್ ಬಾಕ್ಸ್ ನಿರ್ಮಾಣ, ಒಳಚರಂಡಿ ಕಾಮಗಾರಿಗಳ ನಿರ್ವಹಿಸಲು ತೊಂದರೆ ಉಂಟಾಗಿದ್ದ ಕಾರಣ ಸ್ಥಳಕ್ಕೆ ಅನುಗುಣವಾಗಿ Traffic diversion ಮಾಡುವುದಕ್ಕೆ ಹೆಚ್ಚುವರಿ ಕಾಲಾವಕಾಶ ಬೇಕಾಗಿದ್ದುದರಿಂದ ಯೋಜನೆಯ ಕಾಲಾವಧಿಯನ್ನು ದಿನಾಂಕ: 30-08-2020 ರವರೆಗೆ ವಿಸ್ತರಿಸಲಾಗಿರುತ್ತದೆ. |
| 4 | ಶಿವಾನಂದ ಮೇಲುಸೇತುವೆ ಕಾಮಗಾರಿ. | ಶಿವಾನಂದ ವೃತ್ತದಲ್ಲಿ ನಿರ್ಮಿಸಲಾಗುತ್ತಿರುವ ಉಕ್ಕಿನ ಮೇಲುಸೇತುವೆಯನ್ನು ಪೂರ್ಣಗೊಳಿಸಲು ಮೂಲ ಕರಾರಿನಂತೆ ದಿನಾಂಕ: 29-03-2018 (09 ತಿಂಗಳು) ರವರೆಗೆ ಕಾಲಾವಧಿಯನ್ನು ನೀಡಲಾಗಿತ್ತು, ಯೋಜನೆಯ ಅನುಷ್ಠಾನದ ಸಮಯದಲ್ಲಿ ಸ್ಥಳೀಯರು ಕರ್ನಾಟಕದ ಉಚ್ಚ ನ್ಯಾಯಾಲಯದಲ್ಲಿ ಮತ್ತು ಸರ್ವೋಚ್ಚ ನ್ಯಾಯಾಲಯದಲ್ಲಿ ದಾವೆಯನ್ನು ಹೂಡಿದ್ದರಿಂದ ಯೋಜನೆಯನ್ನು ದಿನಾಂಕ:19-08-2017 ರಿಂದ 12-03-2018 ರವರೆಗೆ ಸ್ಥಗಿತಗೊಳಿಸಲಾಗಿರುತ್ತದೆ. ಘನ ನ್ಯಾಯಾಲಯದ ಆದೇಶವನ್ನು ಪಾಲಿಸುವ ಸಂಬಂಧ ಮೂಲ ಮಂಜೂರಾದ ಸೇತುವೆಯ ಉದ್ದ 363.25ಮೀ. ಗಳಿಂದ 492.24ಮೀ. ಗಳವರೆಗೆ ವಿಸ್ತರಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ ಹಾಗೂ ಈ ಯೋಜನೆಯ ಕಾಲಾವಧಿಯನ್ನು ಜೂನ್-2020 ರವರೆಗೆ ವಿಸ್ತರಿಸಲಾಗಿದೆ. |
| 5 | ಹೆಬ್ಬಾಳ ಜಂಕ್ಷನ್ ಮೇಲುಸೇತುವೆ ಕಾಮಗಾರಿ | ಹೆಬ್ಬಾಳ ಜಂಕ್ಷನ್ ಮೇಲುಸೇತುವೆ ಕಾಮಗಾರಿಯನ್ನು ಪೂರ್ಣಗೊಳಿಸಬೇಕಾದ ಅವಧಿ 24 ತಿಂಗಳು. |
| 6 | ಶ್ರೀ ಕಂಠೀರವ ಸ್ಟುಡಿಯೋ ಜಂಕ್ಷನ್ ಗ್ರೇಡ್ ಸೆಪರೇಟರ್ ಕಾಮಗಾರಿ | ಶ್ರೀ ಕಂಠೀರವ ಸ್ಟುಡಿಯೋ ಜಂಕ್ಷನ್ ಗ್ರೇಡ್ ಸೆಪರೇಟರ್ ಕಾಮಗಾರಿಯನ್ನು ದಿನಾಂಕ: 02-05-2012 ರಂದು ಪ್ರಾರಂಭಿಸಿದ್ದು, ದಿನಾಂಕ: 31-12-2015 ಮುಕ್ತಾಯ ದಿನಾಂಕವಾಗಿರುತ್ತದೆ. |

| | | | | |
|---|---|---|---|---|
| ಇ) | ನಿಗದಿತ ಕಾಲಮಿತಿಯಲ್ಲಿ ಕಾರ್ಯ ಮುಗಿಸದ ಗುತ್ತಿಗೆದಾರರ ವಿರುದ್ಧ ಏನು ಕ್ರಮ ಜರುಗಿಸಲಾಗಿದೆ; | 1 | ಈಜಿಪುರ ಮೇಲುಸೇತುವ ಕಾಮಗಾರಿ. | ಮೇಲುಸೇತುವೆ ನಿರ್ಮಾಣ ಸಮಯದಲ್ಲಿ ಮರಗಳನ್ನು ಸ್ಥಳಾಂತರಿಸುವುದು / ಕತ್ತರಿಸುವುದು ವಿವಿಧ ಇಲಾಖೆಗಳ ಅಂದರೆ ಬೆಸ್ಕಾಂ, ಬಿ.ಡಬ್ಲ್ಯೂ.ಎಸ್.ಎಸ್.ಬಿ., ಕೆ.ಪಿ.ಟಿ.ಸಿ.ಎಲ್., ಗೇಲ್, ಬಿ.ಎಸ್.ಎನ್.ಎಲ್., ಇನ್ನಿತರೆ, ಇಲಾಖೆಗಳ ಕೇಬಲ್‌ಗಳನ್ನು ಸ್ಥಳಾಂತರಿಸಿ ಕಾರ್ಯ ನಿರ್ವಹಿಸಬೇಕಾಗಿದ್ದುದರಿಂದ ಈ ಇಲಾಖೆ ಗಳೊಂದಿಗೆ ಸಮನ್ವಯ ಸಾಧಿಸಿಕೊಂಡು ಕಾಮಗಾರಿಯನ್ನು ನಿರ್ವಹಿಸುತ್ತಿರುವುದು ವಿಳಂಭವಾಗುತ್ತಿರುತ್ತದೆ. ಖಾಸಗಿ ಸ್ವತ್ತುಗಳ ಹಾಗೂ ರಕ್ಷಣಾ ಇಲಾಖೆಯ ಸ್ವತ್ತುಗಳ ಭೂಸ್ವಾಧೀನ ಪ್ರಕ್ರಿಯೆಗಳು ನಡೆಯುತ್ತಿದ್ದು, ಇದರಿಂದಾಗಿ ವಿಳಂಬವಾಗುತ್ತಿದೆ.<br><br>ಸಂಚಾರ ದಟ್ಟಣೆ ಇರುವ ಸ್ಥಳಗಳಲ್ಲೇ ಮೇಲು ಸೇತುವೆಯನ್ನು ನಿರ್ಮಿಸ ಬೇಕಾಗಿರುವುದರಿಂದ ಸಂಚಾರಿ ಬದಲಿ ವ್ಯವಸ್ಥೆ ಕಲ್ಪಿಸುವುದು ಕಷ್ಟಸಾಧ್ಯವಾಗುತ್ತಿದ್ದು, ಇದರಿಂದ ವಿಳಂಬ ವಾಗಿರುತ್ತದೆ. |
| | | 2 | ರಾಜಾಜಿನಗರ ಕಾರ್ಡ್ ರಸ್ತೆಯಲ್ಲಿ ಬಸವೇಶ್ವರನಗರ ಮುಖ್ಯ ರಸ್ತೆ ಮಂಜುನಾಥ ನಗರ ಮುಖ್ಯರಸ್ತೆ ಮತ್ತು ಶಿವನಗರ ಮುಖ್ಯ ರಸ್ತೆಗಳ ಕೂಡು ಸ್ಥಳಗಳಲ್ಲಿ ಮೇಲು ಸೇತುವೆ. | ನಿಗದಿತ ಅವಧಿಯೊಳಗೆ ಕಾಮಗಾರಿ ಪೂರ್ಣಗೊಳಿಸುವಲ್ಲಿ ಗುತ್ತಿಗೆದಾರರ ವತಿಯಿಂದ ವಿಳಂಬವಾಗಿರುವುದರಿಂದ, ಕರಾರು ಒಪ್ಪಂದದಂತೆ ದಂಡ ವಿಧಿಸಲಾಗಿರುತ್ತದೆ. |
| | | 3 | ಓಕಳೀಪುರಂ 8 ಪಥದ ಮೇಲುಸೇತುವೆ | ರೈಲ್ವೆ ಇಲಾಖೆಯಿಂದ ಜಾಗವನ್ನು ನೀಡದಿದ್ದ ಕಾರಣ ಗುತ್ತಿಗೆದಾರರಿಗೆ ಅವಧಿ ವಿಸ್ತರಣೆ ನೀಡಲಾಗಿರುತ್ತದೆ. |
| | | 4 | ಶಿವಾನಂದ ಮೇಲುಸೇತುವೆ | ಉಚ್ಛ ನ್ಯಾಯಾಲಯದ ಆದೇಶದಂತೆ ಮೂಲ ಮಂಜೂರಾದ ಸೇತುವೆಯ ಉದ್ದ 363.25 ಮೀ ಗಳಿಂದ 492.24 ಮೀ ಗಳವರೆಗೆ ವಿಸ್ತರಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ ಹಾಗೂ ಮೂಲ ಮಂಜೂರಾತಿಯಂತೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಗುತ್ತಿಗೆದಾರರಿಂದ ವಿಳಂಭ ಆಗದೇ ಇರುವುದರಿಂದ ಅವರ ವಿರುದ್ಧ ವಿಳಂಬಕ್ಕೆ ಕ್ರಮ ಜರುಗಿಸಿರುವುದಿಲ್ಲ. |
| | | 5 | ಹೆಬ್ಬಾಳ ಜಂಕ್ಷನ್ ಮೇಲುಸೇತುವೆ ಕಾಮಗಾರಿ | ಹೆಬ್ಬಾಳ ಜಂಕ್ಷನ್ ಮೇಲುಸೇತುವೆ ಬಳಿಯಲ್ಲಿ ಮೆಟ್ರೋ ರೈಲು ಯೋಜನೆಯನ್ನು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದವರೆಗೆ ನಿರ್ಮಿಸಲು ಉದ್ದೇಶಿಸಿರುವುದರಿಂದ ಹೆಬ್ಬಾಳ ಜಂಕ್ಷನ್ ಮೇಲುಸೇತುವೆ ವಿಸ್ತರಿಸುವ ಕಾಮಗಾರಿಯನ್ನು ಮೆಟ್ರೋ ಯೋಜನೆಯೊಂದಿಗೆ ಸಂಯೋಜನೆಗೊಳಿಸಿ, ಸಮಗ್ರವಾಗಿ ಅಭಿವೃದ್ಧಿಪಡಿಸಲು |

| | | | | |
|---|---|---|---|---|
| | | | | ಉದ್ದೇಶಿಸಿರುವುದರಿಂದ ದಿನಾಂಕ: 13-05-2019 ರಂದು M/s. RITES ಸಂಸ್ಥೆಯವರು ಪ್ರಾಧಿಕಾರಕ್ಕೆ ಪತ್ರ ಬರೆದು ಕಾಮಗಾರಿ ಸ್ಥಗಿತಗೊಳಿಸಲು ಕೋರಿದ್ದ ಹಿನ್ನೆಲೆಯಲ್ಲಿ ಕಾಮಗಾರಿಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿದೆ. ಸದರಿ ಜಂಕ್ಷನ್‌ನಲ್ಲಿ ಸಂಯೋಜನೆಗೊಳಿಸುವ ನಕ್ಷೆ ಪೂರ್ಣಗೊಂಡು, ಅನುಮೋದನೆಗೊಂಡ ನಂತರ ಕೂಡಲೇ ಕೆಲಸ ಪ್ರಾರಂಭಿಸಲಾಗುವುದು. |
| | | 6 | ಶ್ರೀ ಕಂಠೀರವ ಸ್ಟುಡಿಯೋ ಜಂಕ್ಷನ್ ಗ್ರೇಡ್ ಸೆಪರೇಟರ್ ಕಾಮಗಾರಿ | ಶ್ರೀ ಕಂಠೀರವ ಸ್ಟುಡಿಯೋ ಜಂಕ್ಷನ್ ಗ್ರೇಡ್ ಸೆಪರೇಟರ್ ಕಾಮಗಾರಿಯಲ್ಲಿ ಮೇಲುಸೇತುವೆ ಕಾಮಗಾರಿಯನ್ನು ಪೂರ್ಣಗೊಳಿಸಿ ದಿನಾಂಕ: 18-06-2015 ರಂದು ಸಾರ್ವಜನಿಕ ಸಂಚಾರಕ್ಕೆ ಮುಕ್ತಗೊಳಿಸಲಾಗಿರುತ್ತದೆ. ಪೀಣ್ಯ ಕಡೆಯಿಂದ ಮಹಾಲಕ್ಷ್ಮಿ ಲೇಔಟ್ ಕಡೆಗೆ ಹೋಗುವ ಕೆಳಸೇತುವೆ ನಿರ್ಮಾಣ ಕಾಮಗಾರಿ ಶೇ. 60% ರಷ್ಟು ಪೂರ್ಣಗೊಂಡಿದ್ದು, ಉಳಿದ ಶೇ. 40 % ರಷ್ಟು ಭಾಗವನ್ನು ಪೂರ್ಣಗೊಳಿಸಲು ಭೂಸ್ವಾಧೀನ ಪ್ರಕ್ರಿಯೆ ಬಾಕಿ ಇರುವುದರಿಂದ ನಿಗಧಿತ ಕಾಲಮಿತಿಯಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ. |
| ಈ | ಈ ವಿಳಂಬದಿಂದಾಗಿ ಪ್ರತಿದಿನ ಸಾರ್ವಜನಿಕರು ತೊಂದರೆ ಅನುಭವಿಸುತ್ತಿದ್ದು, ಇದರ ನಿವಾರಣೆಗೆ ಸರ್ಕಾರ ಏನು ಕ್ರಮ ಜರುಗಿಸಲಿದೆ? | 1 | ಈಜೀಪುರ ಮೇಲುಸೇತುವೆ ಕಾಮಗಾರಿ | ಮೇಲುಸೇತುವೆ ನಿರ್ಮಾಣ ಸ್ಥಳಗಳಲ್ಲಿ ಸಾರ್ವಜನಿಕರ ಸಂಚಾರಕ್ಕೆ ಅನುವಾಗುವಂತೆ ಸಮಾನಂತರ ರಸ್ತೆಗಳನ್ನು ಸುಸ್ಥಿತಿಯಲ್ಲಿಡಲು ಕ್ರಮ ವಹಿಸಲಾಗಿರುತ್ತದೆ. |
| | | 2 | ರಾಜಾಜಿನಗರ ಕಾರ್ಡ್ ರಸ್ತೆಯಲ್ಲಿ ಬಸವೇಶ್ವರನಗರ ಮುಖ್ಯ ರಸ್ತೆ ಮಂಜುನಾಥನಗರ ಮುಖ್ಯರಸ್ತೆ ಮತ್ತು ಶಿವನಗರ ಮುಖ್ಯ ರಸ್ತೆಗಳ ಕೂಡು ಸ್ಥಳಗಳಲ್ಲಿ ಮೇಲುಸೇತುವೆ. | ಮೇಲು ಸೇತುವೆಗಳನ್ನು ನಿರ್ಮಿಸುತ್ತಿರುವ ಕಾರ್ಡ್ ರಸ್ತೆಯಲ್ಲಿ ಸರ್ವೀಸ್ ರಸ್ತೆಗಳಿದ್ದು, ಈ ಸರ್ವೀಸ್ ರಸ್ತೆಗಳಲ್ಲಿ ಸಾರ್ವಜನಿಕರ ಅನುಕೂಲಕ್ಕಾಗಿ ಬದಲೀ ಸಂಚಾರ ವ್ಯವಸ್ಥೆಯನ್ನು ಅನುವು ಮಾಡಲಾಗಿರುತ್ತದೆ. |
| | | 3 | ಓಕಳೀಪುರಂ 8 ಪಥದ ಮೇಲು ಸೇತುವೆ | ಓಕಳೀಪುರಂ 8 ಪಥದ ಮೇಲು ಸೇತುವೆ ಸ್ಥಳದಲ್ಲಿ ಸಾರ್ವಜನಿಕರ ಮತ್ತು ವಾಹನಗಳ ಸಂಚಾರಕ್ಕೆ ಅನುವಾಗುವಂತೆ ಬದಲೀ ತಾತ್ಕಾಲಿಕ ರಸ್ತೆಯನ್ನು ನಿರ್ಮಿಸಿ ಕಾಮಗಾರಿಯನ್ನು ನಿರ್ವಹಿಸಲು ಕ್ರಮಕೈಗೊಳ್ಳಲಾಗಿದೆ. |
| | | 4 | ಶಿವಾನಂದ ಮೇಲುಸೇತುವೆ | ಮೇಲುಸೇತುವೆ ನಿರ್ಮಾಣ ಸ್ಥಳಗಳಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಸಮಾನಂತರ ರಸ್ತೆಗಳನ್ನು ಸುಸ್ಥಿತಿಯಲ್ಲಿಡಲು ಕ್ರಮವಹಿಸಲಾಗಿರುತ್ತದೆ. |

| | | | | |
|---|---|---|---|---|
| | | 5 | | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳಲ್ಲಿ ಸಂಚಾರ ದಟ್ಟಣೆ ಹೊರತುಪಡಿಸಿ, ಸಾರ್ವಜನಿಕರಿಗೆ ಯಾವುದೇ ತೊಂದರೆಯಾಗಿರುವುದಿಲ್ಲ. |

**ಸಂಖ್ಯೆ: ನಅಇ 34 ಎಂಎನ್‌ವೈ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ.)
ಮುಖ್ಯಮಂತ್ರಿ